# ಕರ್ನಾಟಕ ವಿಧಾನಸಭೆ

ಹದಿಮೂರನೇ ವಿಧಾನಸಭೆ

(ಹದಿಮೂರನೇ ಅಧಿವೇಶನ)

**ಕಾರ್ಯಕಲಾಪಗಳ ಪಟ್ಟಿ**

ಮಂಗಳವಾರ, ದಿನಾಂಕ 27ನೇ ಮಾರ್ಚ್, 2012

(ಸಮಯ: ಬೆಳಿಗ್ಗೆ 11.00 ಗಂಟೆಗೆ)

- - -

## 1. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಎರಡನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಎರಡನೇ ಪಟ್ಟಿ**

## 2. ವರದಿಯನ್ನೊಪ್ಪಿಸುವುದು

ಶ್ರೀ ಬಿದರೂರು ಶ್ರೀಶೈಲಪ್ಪ ವಿರುಪಾಕ್ಷಪ್ಪ (ಅಧ್ಯಕ್ಷರು, ಸದನ ಸಮಿತಿ) ಅವರು:- ದಿನಾಂಕ:07.02.2012ರಂದು ನಡೆದ ಅಧಿವೇಶನದಲ್ಲಿ ಅಶ್ಲೀಲ ಚಿತ್ರಗಳನ್ನು ವೀಕ್ಷಿಸುತ್ತಿದ್ದರೆನ್ನಲಾದ ಪ್ರಕರಣದ ಬಗ್ಗೆ ಸ್ವತಂತ್ರವಾಗಿ ತನಿಖೆ ನಡೆಸಲು ರಚಿತವಾದ ಸದನ ಸಮಿತಿಯ ವರದಿಯನ್ನೊಪ್ಪಿಸುವುದು.

## 3. ವಿತ್ತೀಯ ಕಾರ್ಯಕಲಾಪ

2011-12ನೇ ಸಾಲಿನ ಪೂರಕ ಅಂದಾಜುಗಳ ಕುರಿತು ಚರ್ಚೆ, ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

## 4. ಶಾಸನ ರಚನೆ

### I <u>ವಿಧೇಯಕಗಳನ್ನು ಮಂಡಿಸುವುದು</u>

1) **ಕರ್ನಾಟಕ ಧನ ವಿನಿಯೋಗ ವಿಧೇಯಕ, 2012**

**ಶ್ರೀ ಡಿ.ವಿ.ಸದಾನಂದ ಗೌಡ (ಮುಖ್ಯಮಂತ್ರಿಗಳು) ಅವರು:-**

ಅ. 2012ನೇ ಸಾಲಿನ ಕರ್ನಾಟಕ ಧನ ವಿನಿಯೋಗ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ. ಹಾಗೂ ವಿಧೇಯಕವನ್ನು ಮಂಡಿಸುವುದು.

ಮು.ತಿ.ನೋ.

**2) ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ)ವಿಧೇಯಕ, 2012**
**ಶ್ರೀ ಡಿ.ವಿ. ಸದಾನಂದ ಗೌಡ (ಮುಖ್ಯಮಂತ್ರಿ) ಅವರು:-**

ಅ) 2012ನೇ ಸಾಲಿನ ಭೂ ಸುಧಾರಣೆಗಳ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

**3) ಕರ್ನಾಟಕ ವಿಧಾನಮಂಡಲದವರ ವೇತನ, ನಿವೃತ್ತಿ ವೇತನ ಮತ್ತು ಭತ್ಯೆಗಳು (ತಿದ್ದುಪಡಿ) ವಿಧೇಯಕ, 2012**
**ಶ್ರೀ ಸುರೇಶ್ ಕುಮಾರ್ ( ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು,ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ, ನಗರಾಭಿವೃದ್ಧಿ ಸಚಿವರು) ಅವರು:-**

ಅ) 2012ನೇ ಸಾಲಿನ ಕರ್ನಾಟಕ ವಿಧಾನಮಂಡಲದವರ ವೇತನ,ನಿವೃತ್ತಿ ವೇತನ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**1) ಕರ್ನಾಟಕ ಧನ ವಿನಿಯೋಗ ವಿಧೇಯಕ, 2012**
**ಶ್ರೀ ಡಿ.ವಿ.ಸದಾನಂದ ಗೌಡ (ಮುಖ್ಯಮಂತ್ರಿಗಳು) ಅವರು:-**
ಅ. 2012ನೇ ಸಾಲಿನ ಕರ್ನಾಟಕ ಧನ ವಿನಿಯೋಗ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2) ಕರ್ನಾಟಕ ಭೂ ಸುಧಾರಣೆಗಳ(ತಿದ್ದುಪಡಿ) ವಿಧೇಯಕ, 2012**
**ಶ್ರೀ ಡಿ.ವಿ. ಸದಾನಂದ ಗೌಡ) (ಮುಖ್ಯಮಂತ್ರಿ) ಅವರು:-**

ಅ) ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**3) ಸಹ್ಯಾದ್ರಿ ಪರಂಪರೆ ಅಭಿವೃದ್ಧಿ ಪ್ರಾಧಿಕಾರ, ವಿಧೇಯಕ, 2011**
**ಶ್ರೀ ಗೋವಿಂದ ಎಂ ಕಾರಜೋಳ, (ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಸಚಿವರು) ಅವರು:-**

ಅ) ಸಹ್ಯಾದ್ರಿ ಪರಂಪರೆ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

4) ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕ, 2012

**ಶ್ರೀ ಸುರೇಶ್ ಕುಮಾರ್ ( ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು,ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ, ನಗರಾಭಿವೃದ್ಧಿ ಸಚಿವರು) ಅವರು:–**

ಅ) 2012ನೇ ಸಾಲಿನ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 5. ವಿತ್ತೀಯ ಕಾರ್ಯಕಲಾಪ

2012–13ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಸಾಮಾನ್ಯ ಚರ್ಚೆ.

## 6. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಯು.ಟಿ.ಖಾದರ್ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷವಾಗಿ ಮಂಗಳೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಅಭಾವದ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

**2.** ಶ್ರೀ ವಿ. ಮುನಿಯಪ್ಪ ಅವರು ಡಾ|| ಪರಮಶಿವಯ್ಯ ವರದಿಗೆ ಅನುಗುಣವಾಗಿ "ಎನ್.ಆರ್.ಎಸ್.ಎ" ರವರ ತಾಂತ್ರಿಕ ತಜ್ಞರ ವರದಿಯಂತೆ ರಾಜ್ಯದ ಬಯಲು ಸೀಮೆ ಪ್ರದೇಶದ ತಾಲ್ಲೂಕುಗಳಿಗೆ ನೀರು ಒದಗಿಸುವ ಬಗ್ಗೆ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

3. ಡಾ|| ಶರಣ್ ಪ್ರಕಾಶ್ ರುದ್ರಪ್ಪ ಪಾಟೀಲ್ ಅವರು ತೊಗರಿ ಬೆಳೆಗಾರರ ಅನುಕೂಲಕ್ಕಾಗಿ ಸ್ಥಾಪಿಸಲಾಗಿರುವ ಕೇಂದ್ರಗಳು ಸ್ಥಗಿತಗೊಂಡಿದ್ದು, ಅವುಗಳನ್ನು ಪುನರ್ ಸ್ಥಾಪಿಸಿ ರೈತರ ಹಿತರಕ್ಷಣೆ ಕಾಪಾಡುವುದರ ಬಗ್ಗೆ ಕೃಷಿ ಸಚಿವರ ಗಮನ ಸೆಳೆಯುವುದು.

4. ಶ್ರೀಯುತರಾದ ಹೆಚ್.ಕೆ. ಕುಮಾರಸ್ವಾಮಿ ಮತ್ತು ಕೆ.ಎಂ. ಶಿವಲಿಂಗೇಗೌಡ ಅವರುಗಳು ಹಾಸನ ಜಿಲ್ಲೆಯಲ್ಲಿ ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದಂತೆ ಕಟ್ಟಡ ಕಾಮಗಾರಿಗಳನ್ನು ಪ್ರಾರಂಭ ಮಾಡದಿರುವ ಬಗ್ಗೆ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

5. ಶ್ರೀಯುತರಾದ ಹೆಚ್.ಎಸ್. ಪ್ರಕಾಶ್ ಮತ್ತು ಕೆ.ಎಂ. ಶಿವಲಿಂಗೇಗೌಡ ಅವರುಗಳು ಹಾಸನ ನಗರದಲ್ಲಿ ಸರ್ಕಾರಿ ಇಂಜಿನೀಯರಿಂಗ್ ಕಾಲೇಜಿಗೆ ಸೇರಿದ ಕಾಂಪೌಂಡ್ ಗೋಡೆಯನ್ನು ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಅತಿಕ್ರಮ ಮಾಡಲು ಪ್ರಯತ್ನಿಸಿರುವವರ ಮೇಲೆ ಸರ್ಕಾರ ಕ್ರಮ ಕೈಗೊಂಡಿರುವ ಬಗ್ಗೆ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

ಮು.ತಿ.ನೋ.

6. ಶ್ರೀಯುತರಾದ ಹೆಚ್.ಡಿ. ರೇವಣ್ಣ, ಹೆಚ್.ಎಸ್. ಪ್ರಕಾಶ್ ಮತ್ತು ಕೆ.ಎಂ. ಶಿವಲಿಂಗೇಗೌಡ ಅವರುಗಳು ಹಾಸನ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಿಂದ ಆಲೂಗಡ್ಡೆ ಬೆಳೆ ನಷ್ಟವಾಗಿರುವುದರಿಂದ ರೈತರಿಗೆ ಉತ್ತಮವಾದ ಆಲೂಗಡ್ಡೆ ಬಿತ್ತನೆ ಬೀಜಗಳನ್ನು ಸಬ್ಸಿಡಿ ದರದಲ್ಲಿ ಒದಗಿಸುವ ಹಾಗೂ ಅವಶ್ಯಕತೆ ಇರುವ ರಸಗೊಬ್ಬರವನ್ನು ವಿತರಿಸುವ ಬಗ್ಗೆ ತೋಟಗಾರಿಕಾ ಸಚಿವರ ಗಮನ ಸೆಳೆಯುವುದು.

## 7. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

ಶ್ರೀಯುತರಾದ ಸಿದ್ದರಾಮಯ್ಯ, ಟಿ.ಬಿ. ಜಯಚಂದ್ರ, ಡಾ|| ಜಿ. ಪರಮೇಶ್ವರ, ರೋಷನ್ ಬೇಗ್, ಸಿ.ಎಸ್. ನಾಡಗೌಡ ಹಾಗೂ ಇತರರು ರಾಜ್ಯದಲ್ಲಿ ಬರಪೀಡಿತ ಪ್ರದೇಶಗಳೆಂದು ಘೋಷಿಸಿರುವ ಪ್ರದೇಶಗಳಲ್ಲಿ ಬರ ಪರಿಹಾರ ಕಾಮಗಾರಿಗಳನ್ನು ಸಮರೋಪಾದಿಯಲ್ಲಿ ಕೈಗೊಳ್ಳುವಲ್ಲಿ ಸರ್ಕಾರ ಸಂಪೂರ್ಣವಾಗಿ ವಿಫಲವಾಗಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಮುಂದುವರೆದ ಚರ್ಚೆ ಹಾಗೂ ಸರ್ಕಾರದ ಉತ್ತರ.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)